





(ಅವತೀರ್ಣ - ಮಕ್ಕಾದಲ್ಲಿ)

| | |
|---|---|
| ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ | بِسْمِ اللّٰهِ الرَّحْمٰنِ الرَّحِيْمِ ۝ |
| 1. ಆವರಿಸಿ ಬಿಡಲಿರುವ ಆ ವಿಪತ್ತಿನ ಸುದ್ದಿ ನಿಮಗೆ ತಲುಪಿದೆಯೇ? | هَلْ اَتٰىكَ حَدِيْثُ الْغَاشِيَةِ ۝١ |
| 2. ಕೆಲವು ಮುಖಗಳು[1] ಅಂದು ಭಯಗ್ರಸ್ತವಾಗಿರುವುವು, | وُجُوْهٌ يَّوْمَئِذٍ خَاشِعَةٌ ۝٢ |
| 3. ತೀವ್ರ ಪರಿಶ್ರಮ ಪಡುತ್ತಿರುವುವು, | عَامِلَةٌ نَّاصِبَةٌ ۝٣ |
| 4. ಘೋರ ಅಗ್ನಿಯಲ್ಲಿ ಉರಿಯುತ್ತಿರುವುವು- | تَصْلٰى نَارًا حَامِيَةً ۝٤ |
| 5. ಅವರಿಗೆ ಕುದಿಯುತ್ತಿರುವ ಚಿಲುಮೆಯ ನೀರನ್ನು ಕುಡಿಯಲು ಕೊಡಲಾಗುವುದು. | تُسْقٰى مِنْ عَيْنٍ اٰنِيَةٍ ۝٥ |
| 6. ಮುಳ್ಳು ತುಂಬಿದ ಒಣಹುಲ್ಲಿನ ಹೊರತು ಬೇರೆ ಯಾವ ಆಹಾರವೂ ಅವರಿಗೆ ಇರಲಾರದು- | لَيْسَ لَهُمْ طَعَامٌ اِلَّا مِنْ ضَرِيْعٍ ۝٦ |
| 7. ಅದು ಪುಷ್ಟಿಗೊಳಿಸಲಾರದು, ಹಸಿವೆಯನ್ನೂ ನೀಗಿಸಲಾರದು- | لَّا يُسْمِنُ وَلَا يُغْنِيْ مِنْ جُوْعٍ ۝٧ |
| 8. ಅಂದು ಕೆಲವು ಮುಖಗಳು ಕಾಂತಿಯುಕ್ತವಾಗಿರುವುವು, | وُجُوْهٌ يَّوْمَئِذٍ نَّاعِمَةٌ ۝٨ |
| 9. ತಮ್ಮ ಸಾಧನೆಗಳ ಬಗ್ಗೆ ಸಂತುಷ್ಟವಾಗಿರುವುವು. | لِّسَعْيِهَا رَاضِيَةٌ ۝٩ |
| 10. ಉನ್ನತವಾದ ಸ್ವರ್ಗೋದ್ಯಾನಗಳಲ್ಲಿ ಇರುವುವು- | فِيْ جَنَّةٍ عَالِيَةٍ ۝١٠ |
| 11. ಅಲ್ಲಿ ಅವರು ಯಾವುದೇ ಅಸಂಬದ್ಧ ಮಾತನ್ನು ಕೇಳಲಾರರು. | لَّا تَسْمَعُ فِيْهَا لَاغِيَةً ۝١١ |

1. 'ಮುಖಗಳು' ಎಂಬ ಪದವನ್ನು ಇಲ್ಲಿ ವ್ಯಕ್ತಿಗಳು ಎಂಬರ್ಥದಲ್ಲಿ ಪ್ರಯೋಗಿಸಲಾಗಿದೆ. ಮುಖವು, ಮಾನವ ದೇಹದ ಅತ್ಯಂತ ಸುವ್ಯಕ್ತವಾದ ಭಾಗವಾಗಿರುವುದರಿಂದ 'ಕೆಲವು ವ್ಯಕ್ತಿಗಳು' ಎಂದು ಹೇಳುವ ಬದಲು 'ಕೆಲವು ಮುಖಗಳು' ಎಂಬ ಪದವನ್ನು ಪ್ರಯೋಗಿಸಲಾಗಿದೆ.

| | |
|---|---|
| 12. ಅದರಲ್ಲಿ ಚಿಲುಮೆಗಳು ಹರಿಯುತ್ತಿರುವುವು, | فِيهَا عَيْنٌ جَارِيَةٌ ﴿١٢﴾ وقف لازم |
| 13. ಅದರೊಳಗೆ ಉನ್ನತ ಪೀಠಗಳಿರುವುವು, | فِيهَا سُرُرٌ مَّرْفُوعَةٌ ﴿١٣﴾ |
| 14. ಪಾನಪಾತ್ರೆಗಳು ಇರಿಸಲ್ಪಟ್ಟಿರುವುವು, | وَّأَكْوَابٌ مَّوْضُوعَةٌ ﴿١٤﴾ |
| 15. ಒರಗುವ ದಿಂಬುಗಳ ಸಾಲುಗಳಿರುವುವು, | وَّنَمَارِقُ مَصْفُوفَةٌ ﴿١٥﴾ |
| 16. ಮತ್ತು ನುಣುಪಾದ ಹಾಸುಗಳು ಹಾಸಿರುವುವು. | وَّزَرَابِيُّ مَبْثُوثَةٌ ﴿١٦﴾ |
| 17. (ಇವರು ನಂಬುವುದಿಲ್ಲವೆಂದಾದರೆ) ಒಂಟೆಗಳು ಹೇಗೆ ಸೃಷ್ಟಿಸಲ್ಪಟ್ಟಿವೆ ಎಂಬುದನ್ನು ಇವರು ನೋಡುವುದಿಲ್ಲವೇ? | أَفَلَا يَنظُرُونَ إِلَى الْإِبِلِ كَيْفَ خُلِقَتْ ﴿١٧﴾ |
| 18. ಆಕಾಶವು ಹೇಗೆ ಎತ್ತರಿಸಲ್ಪಟ್ಟಿದೆಯೆಂಬುದನ್ನು ನೋಡುವುದಿಲ್ಲವೇ? | وَإِلَى السَّمَاءِ كَيْفَ رُفِعَتْ ﴿١٨﴾ |
| 19. ಪರ್ವತಗಳು ಹೇಗೆ ನಾಟಲ್ಪಟ್ಟಿವೆಯೆಂಬುದನ್ನು ನೋಡುವುದಿಲ್ಲವೇ? | وَإِلَى الْجِبَالِ كَيْفَ نُصِبَتْ ﴿١٩﴾ |
| 20. ನೆಲವನ್ನು ಹೇಗೆ ಹಾಸಲಾಗಿದೆಯೆಂಬುದನ್ನು ನೋಡುವುದಿಲ್ಲವೇ?[2] | وَإِلَى الْأَرْضِ كَيْفَ سُطِحَتْ ﴿٢٠﴾ |
| 21. ಸರಿ! (ಸಂದೇಶವಾಹಕರೇ) ನೀವು ಉಪದೇಶ ಮಾಡುತ್ತಾಸಾಗಿರಿ. ನೀವು ಕೇವಲ ಉಪದೇಶಕರು. | فَذَكِّرْ إِنَّمَا أَنتَ مُذَكِّرٌ ﴿٢١﴾ |
| 22. ಅವರ ಮೇಲೇನೂ ಬಲಾತ್ಕಾರ ಮಾಡುವವರಲ್ಲ- | لَّسْتَ عَلَيْهِم بِمُصَيْطِرٍ ﴿٢٢﴾ |
| 23. ಆದರೆ ಯಾರು ವಿಮುಖನಾಗುವನೋ ಹಾಗೂ ನಿರಾಕರಿಸುವನೋ- | إِلَّا مَن تَوَلَّىٰ وَكَفَرَ ﴿٢٣﴾ |
| 24. ಅವನಿಗೆ ಅಲ್ಲಾಹನು ಘೋರ ಯಾತನೆ ಕೊಡುವನು. | فَيُعَذِّبُهُ اللَّهُ الْعَذَابَ الْأَكْبَرَ ﴿٢٤﴾ |

2. ಅರ್ಥಾತ್- ಪರಲೋಕದ ಕುರಿತಾದ ಈ ಮಾತುಗಳನ್ನು ಕೇಳಿ ಇದು ಸಂಭವಿಸುವುದಾದರೂ ಹೇಗೆ ಎಂದು ಅವರು ಕೇಳುತ್ತಾರೆ. ಹಾಗಾದರೆ ಅವರು ತಮ್ಮ ಸುತ್ತಮುತ್ತಲಿನ ವಸ್ತುಗಳ ಕಡೆಗೆ ದೃಷ್ಟಿ ಬೀರುವುದಿಲ್ಲವೇ? ಈ ಒಂಟೆ ಹೇಗೆ ಸೃಷ್ಟಿಸಲ್ಪಟ್ಟಿತು? ಈ ಆಕಾಶ ಹೇಗೆ ಉನ್ನತಗೊಂಡಿತು? ಈ ಪರ್ವತ ಹೇಗೆ ನೆಲೆಯೂರಿತು? ಈ ಭೂಮಿ ಹೇಗೆ ಹರಡಿತು? ಎಂದು ಅವರೆಂದೂ ಆಲೋಚಿಸುವುದಿಲ್ಲವೇ. ಈ ವಸ್ತುಗಳೆಲ್ಲವೂ ಉಂಟಾಗಲು ಸಾಧ್ಯವಿದೆ. ಮಾತ್ರವಲ್ಲ ಅವರ ಮುಂದೆಯೇ ಅಸ್ತಿತ್ವದಲ್ಲಿದೆ. ಹಾಗಿರುವಾಗ ಪರಲೋಕ ಮಾತ್ರ ಯಾಕೆ ಬರಲಾರದು. ಪರಲೋಕದಲ್ಲಿ ಮತ್ತೊಂದು ವಿಶ್ವ ಅಸ್ತಿತ್ವಕ್ಕೆ ಬರಲು ಯಾಕೆ ಸಾಧ್ಯವಿಲ್ಲ. ಸ್ವರ್ಗ ಮತ್ತು ನರಕಗಳೇಕೆ ಉಂಟಾಗಲಾರವು.

25. ಇವರಿಗೆಲ್ಲ ನಮ್ಮ ಕಡೆಗೇ ಮರಳಲಿಕ್ಕಿದೆ-

إِنَّ إِلَيْنَآ إِيَابَهُمْ ۝٢٥

26. ತರುವಾಯ ಇವರ ವಿಚಾರಣೆ ನಡೆಸುವ ಹೊಣೆ ನಮ್ಮ ಮೇಲೆಯೇ ಇದೆ.

ثُمَّ إِنَّ عَلَيْنَا حِسَابَهُمْ ۝٢٦